## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1271

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಡಾ: ಜೈಮಾಲ ರಾಮಚಂದ್ರ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 17.03.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಸ್ತುತ ರಾಜ್ಯದಲ್ಲಿ ಬಿ.ಪಿ.ಎಲ್ ಪಡಿತರ ಚೀಟಿಗಳ ಹಂಚಿಕೆ ಸ್ಥಗಿತಗೊಂಡಿರುವುದರಿಂದ ಬಡವರಿಗೆ ಪಡಿತರ ದೊರೆಯದೆ ಸಂಕಷ್ಟಕ್ಕೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ವರ್ ಸಮಸ್ಯೆಯಿಂದಾಗಿ ಹೊಸದಾಗಿ ಆದ್ಯತಾ (BPL)/ ಆದ್ಯತೇತರ (APL) ಪಡಿತರ ಚೀಟಿಗಾಗಿ ಅರ್ಜಿಗಳನ್ನು ಸ್ವೀಕರಿಸುವ ಆನ್ ಲೈನ್ ಪ್ರಕ್ರಿಯೆಯನ್ನು ಕೆಲವು ದಿನಗಳ ಕಾಲ ತಾತ್ಕಾಲಿಕವಾಗಿ ಜನವರಿ ಮಾಹೆಯಲ್ಲಿ ಸ್ಥಗಿತಗೊಳಿಸಲಾಗಿತ್ತು. ಪ್ರಸ್ತುತ ಹೊಸ ಪಡಿತರ ಚೀಟಿಗಾಗಿ ಅರ್ಜಿಗಳನ್ನು ಆನ್ ಲೈನ್ ಮೂಲಕ ಸಲ್ಲಿಸಲು ಅವಕಾಶವನ್ನು ಕಲ್ಪಿಸಲಾಗಿದೆ. |
| ಆ | ಅನರ್ಹರಿಗೂ ಬಿ.ಪಿ.ಎಲ್ ಕಾರ್ಡ್ ವಿತರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನರ್ಹರು ಬಿ.ಪಿ.ಎಲ್ ಕಾರ್ಡ್ ಪಡೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಇ | ಬಂದಿದ್ದಲ್ಲಿ, ಈಗಾಗಲೇ ವಿತರಿಸಿರುವ ಅನರ್ಹ ಬಿ.ಪಿ.ಎಲ್ ಕಾರ್ಡ್‌ಗಳನ್ನು ಮುಟ್ಟುಗೋಲು ಹಾಕಿ ಅರ್ಹ ಫಲಾನುಭವಿಗಳಿಗೆ ಬಿ.ಪಿ.ಎಲ್ ಪಡಿತರ ಚೀಟಿಗಳನ್ನು ಹಂಚಿಕೆ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಮಾಹಿತಿಯನ್ನು ನೀಡುವುದು) | ರಾಜ್ಯದಲ್ಲಿ ಕಳೆದ ಎಂಟು ತಿಂಗಳಿನಿಂದ ಒಟ್ಟು 63,922 ಅನರ್ಹ ಪಡಿತರ ಚೀಟಿಗಳನ್ನು ಗುರುತಿಸಿ ಅವರಿಂದ ರೂ.96,27,960/- ದಂಡವನ್ನು ಸಂಗ್ರಹಿಸಿ ಪಡಿತರ ಚೀಟಿಗಳನ್ನು ರದ್ದುಪಡಿಸಲಾಗಿದೆ.<br>ಅನರ್ಹರು ಪಡಿತರ ಚೀಟಿಗಳನ್ನು ಸ್ವ ಇಚ್ಛೆಯಿಂದ ಸಂಬಂಧಪಟ್ಟ ತಾಲ್ಲೂಕು/ವಲಯ ಕಛೇರಿಗಳಿಗೆ ಸಂಪರ್ಕಿಸಿ ಏಪ್ರಿಲ್-2020 ರೊಳಗೆ ಅಭ್ಯರ್ಪಣೆಯನ್ನು ಮಾಡುವಂತೆ ಕಾಲಾವಕಾಶವನ್ನು ನಿಗಧಿಪಡಿಸಲಾಗಿದೆ. ಈ ಅವಧಿ ಮುಗಿದ ನಂತರವೂ ಅನರ್ಹರು ಪಡಿತರ |

| | | |
|---|---|---|
| | | ಚೀಟಿಯನ್ನು ಅಧ್ಯರ್ಪಣೆ ಮಾಡದಿದ್ದಲ್ಲಿ ಇಲಾಖಾವತಿಯಿಂದ ಅನರ್ಹ ಪಡಿತರ ಚೀಟಿ ಹೊಂದಿರುವವರ ವಿರುದ್ಧ ದಂಡ ವಿಧಿಸಲಾಗುವುದು. ಹಾಗೂ ಅವಶ್ಯಕ ವಸ್ತುಗಳ ಕಾಯ್ದೆ 1955 ರಡಿ ಹೊರಡಿಸಲಾದ The prevention of unauthorised possession of ration card order 1977 ರನ್ವಯ ಪ್ರಕರಣ ದಾಖಲಿಸಲಾಗುವುದೆಂದು ಸ್ಥಳೀಯ ಮಾಧ್ಯಮಗಳ ಮೂಲಕ ಸಾರ್ವಜನಿಕರಿಗೆ ಮಾಹಿತಿ ನೀಡಲಾಗಿರುತ್ತದೆ |

ಆನಾಸ 101 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.